**8 ವಿದ್ಯೇಶ ವಿಘ್ನೇಶ ಗಣಪತಿ :** ಇದು ಒಂದು ಸಂಶೋಧನಾ ಪ್ರಬಂಧವಾಗಿರುತ್ತದೆ.

ಯಾವುವೇ ಶುಭ ಕಾರ್ಯಗಳಲ್ಲಿ, ಮೊದಲಿಗೆ ನಾವು ವಿದ್ಯೇಶ ವಿಘ್ನೇಶ ಗಣಪತಿಯನ್ನು ವಂದಿಸುತ್ತೇವೆ. ಈ ಗಣಪತಿಯ ಜನ್ಮ ಚರಿತ್ರೆಯು ಬಹು ಕುತೂಹಲಕಾರಿಯಾಗಿದೆ :

ಒಂದೊಮ್ಮೆ, ದೇವೀ ಪಾರ್ವತಿಯು, ತನ್ನ ತುಸು ಮೈ ಕೆಸರನ್ನು ಕೆರೆದು ಅರೆದು, ಓರ್ವ ವಟುವಿನಾಕಾರ ರೂಪಿಸಿ, ಜೀವ ಚೇತನವನ್ನು ಅವನೊಳಗೆ ಉದ್ದಿಪನಗೊಳಿಸಿದಳಂತೆ. ಮತ್ತು, ಈ ಕುಮಾರನನ್ನು ತನ್ನ ಸ್ನಾನ ಗೃಹ ದ್ವಾರದೇಶದಲ್ಲಿ ಕಾವಲಿಗಾಗಿ ಕೂಡಿಸಿ, ತನ್ನ ಸ್ನಾನಾಲಂಕಾರಗಳೊಳಗೆ ತೊಡಗಿದಳಂತೆ. ಈ ಮಾತೆಯ ದರ್ಶನಾಕಾಂಕ್ಷೆಯಲ್ಲಿ ಆಗಮಿಸಿದ ಅತಿಥಿಗಳನ್ನು, ಈ ವಟುವು ಸನ್ಮಾನಿಸಿ, ಉಪಚರಿಸಿ, ಒಳ ಗೃಹದಲ್ಲಿ ಕಾದಿರಲು ಅವಕಾಶಗಳನ್ನು ಕಲ್ಪಿಸಿ ಕೊಡುತ್ತಿದ್ದನಂತೆ.

ಅದಾಗ, ಮಹಾದೇವ ಈಶ್ವರನೇ, ದೇವಿಯ ದರ್ಶನಕ್ಕಾಗಿ ಆಗಮಿಸಿದನಂತೆ. ಅವನ ಮುಖ ಪರಿಚಯವಿಲ್ಲದ ಈ ವಟುವು ಅವನನ್ನು ತಡೆ ಹಿಡಿದನಂತೆ. ಅದೇಕೋ, ಸಮಾಧಾನದ ವ್ಯವಧಾನ ಅಲ್ಲಿ ಆದಾಗ ಒಡ ಮೂಡಲಿಲ್ಲ. ಮಾತಿಗೆ ಮಾತು ಬೆಳೆದು, ಈಶ್ವರನ ತ್ರಿಶೂಲವು, ಈ ವಟುವಿನ ಶಿರವನ್ನು ಕತ್ತರಿಸಿ ಬಿಟ್ಟಿತು. ಓಡೋಡಿ ಬಂದ ಪಾರ್ವತಿಯು ಈ ದೃಶ್ಯವನ್ನು ಕಂಡು, ದಿಗ್ಭ್ರಾಂತಳಾದಳು.

ಮಮತೆಯ ಪತ್ನಿಯಿಂದ ವಿಚಾರಗಳೆಲ್ಲವನ್ನೂ ತಿಳಿದ ಮಹಾದೇವನು, ಅವಳನ್ನು ಪರಿಶಾಂತಗೊಳಿಸಲಾಗಿ, ತನ್ನ ಗಣಗಳೆಲ್ಲರನ್ನೂ ಎಲ್ಲೆಡೆ, ಉತ್ತರ ದೆಸೆಗೆ ಶಿರವಿಟ್ಟು ನಿದ್ರಿಸುತ್ತಿದ್ದ, ಯಾವುದೇ ಜೀವಿಯ ಒಂದು ಶಿರವನ್ನು ತರಿದು ತರಲಾಗಿ ಅಣತಿಯಿತ್ತು ಕಳುಹಿದನಂತೆ. ಈ ಗಣಗಳು ಶೀಘ್ರವಾಗಿ ತಂದೊಪ್ಪಿಸಿದ ಒಂದು ಆನೆಯ ಶಿರವನ್ನು ಈ ವಟುವಿನ ಮುಂಡ ಭಾಗಕ್ಕೆ ಬೆಸೆದು, ಅವನೊಳಗೆ ಪ್ರಾಣ ಚೇತನವನ್ನು ಪುನರಾವಾಹಿಸಿ, ಈ ಶಿರವು ಸಂಗ್ರಹಿಸಿದ ವಿದ್ಯಾದಿ ಆಹಾರಗಳೆಲ್ಲವನ್ನೂ ಸಂಗ್ರಹಿಸಿಕೊಂಡಿರಬಲ್ಲ ತನುವನ್ನೂ ಕರುಣಿಸಿ, ಅವನನ್ನು ತನ್ನ ಗಣಗಳೆಲ್ಲವರ ನಾಯಕನಾಗಿ ನೇಮಿಸಿದನಂತೆ ! ಆ ಬಳಿಕ, ಅವನನ್ನು ವಿದ್ಯೇಶ ವಿಘ್ನೇಶನಾಗಿರೆಂದೂ ಕರುಣಿಸಿದನಂತೆ !!

ಆದರೆ, ಏನು ಇದು ಎಲ್ಲ ?

ಮೊದಲಿಗೆ ವಿದ್ಯೆ, ಎಂದರೆ ಏನು ? ಪ್ರಕೃತೀ ಪುರುಷರ ಸ್ಥಿತಿ ಗತಿಗಳ, ಅಂದರೆ ಯಾವುದೇ ಒಂದು ಕ್ರಿಯಾ ನಿರ್ವಹಣೆಯ, ಶಾಬ್ದಿಕ ನಿರೂಪಣೆ, ನಮ್ಮ ಮಿದುಳುಗಳೊಳಗಿನ ನರಾಣು ಜಾಲಗಳಲ್ಲಿನ ಅವುಗಳ

ಭಾಷಾಂತರ ಮತ್ತು ಅದರ ಅರ್ಥ ವಿನ್ಯಾಸ, ಅಂದರೆ, ನಮ್ಮ ಮನದ ಅಂತರಾಳದೊಳಗೆ ರೂಪುಗೊಳ್ಳುವ ಇದರ ಚೇತನಾಮಯ ಸ್ವರೂಪ, ಇದನ್ನು ನಾವು ಮಾತುಗಳು, ಶ್ರುತರೂಪೀ ಜ್ಞಾನ, ವಿದ್ಯೆ, ಅನ್ನಬಹುದು.

ಇದು ಹೀಗಿರುತ್ತಾ, ಈ ಪ್ರಕೃತೀ ಮಾತೆಯು, ಪಾರ್ವತೀ ದೇವಿಯು, ಅಗಾಧ ವ್ಯಾಪ್ತಿಯನ್ನು ಹೊಂದಿರುತ್ತಾಳೆ; ಹಾಗಾಗಿ, ನಮ್ಮೆಲ್ಲಾ ಗೋಚರದೊಳಗಿನ ವಿದ್ಯೆಗಳು ಜತೆಗೂಡಿದರೂ, ಇವುಗಳು ಆ ಮಾತೆ, ಪ್ರಕೃತಿ ದೇವೀ ಪಾರ್ವತಿಯ, ತುಸು ಮೈ ಕರೆತದೊಳಗಿನ ಕೆಸರನ್ನು ಮೀರಲಾರವೇನೋ, ಮತ್ತು, ಇದರಿಂದ ಜಾಸ್ತಿ ಆಳವನ್ನು ನಾವು ನಿರುಕಿಸಲಾರವೇವೋ ? ಆದರೂ, ನಮ್ಮ ದೃಷ್ಟಿಕೋನಗಳಿಂದ ಇವೇ ಅಗಾಧವಿರುತ್ತವೆ.

ಇದು ಹೀಗಿರುತ್ತಾ, ಪಾರ್ವತಿಯು ತನ್ನ ಸೌಂದರ್ಯವನ್ನು ತುಸು ತಿಳಿದುಕೊಳ್ಳುವ ಇಚ್ಚೆಯಿಂದ, ಅವಳದೇ ಒಂದು ಪುಟ್ಟ ಭಾಗದಿಂದ ಓರ್ವ ಕುಮಾರ ವಟುವನ್ನು ರೂಪುಗೊಳಿಸಿ, ಅವನೊಳಗೆ ತುಸು ಕುತೂಹಲವನ್ನು ಆವಾಹಿಸಿದಳು; ಮತ್ತು, ಈ ಪಾರ್ವತಿಯ ಮುದ್ದು ಕುವರನಲ್ಲಿ, ಆ ಮಹಾದೇವನಿಗೆ, ಒಂದೊಮ್ಮೆ ಅದೇಕೆ, ಅಷ್ಟು ಕ್ರೋಧವು ಒಡಮೂಡಿ ಬಂದಿತು ? ಆಶ್ಚರ್ಯ !

ಆದರೆ, ತುಸು ಚಿಂತಿಸೋಣ :

ಪ್ರಾಕೃತಿಕ ಕುತೂಹಲವು ಸದಾಕಾಲ ಎಲ್ಲಾ ದೆಸೆಗಳಲ್ಲೂ ಹರಿಯುತ್ತಿರುವುದು. ಆದರೆ, ನಮ್ಮ ಸ್ವಂತಿಕೆಯನ್ನು ಉದ್ದೇಶ ಪೂರ್ವಕವಾಗಿ ಈ ಕುತೂಹಲದೆಡೆ, ತುಸು ನಿಯೋಜಿಸಿಕೊಂಡರೆ ಮಾತ್ರ, ಅದರ ಗತಿಗಳನ್ನು ನಿರ್ದೇಶಿಸುತ್ತಾ ವಿದ್ಯಾರ್ಜನೆಗಳಲ್ಲಿ ಹಲವು ವಿಭಿನ್ನ ಸ್ತರಗಳನ್ನು ನಾವು ಸಾಧಿಸಿಕೊಳ್ಳಬಲ್ಲೆವು. ಈ, ವಿಭಿನ್ನ ಸ್ತರಗಳು, ಅನುಕ್ರಮವಾಗಿ, ಶ್ರವಣ ಮನನ ನಿಧಿ ಧ್ಯಾಸನ ಮತ್ತು ಸಾಕ್ಷಾತ್ಕರಣ, ಅನ್ನಬಹುದು. ಇದು ಹೀಗಿರುತ್ತಾ, ನಾವು ಇದೀಗ ಶ್ರೀ ಗುರುಗಳ ಮೂಲಕ, ಶ್ರವಣ, ಕೇಳಿಸಿಕೊಂಡ, ಯಾ ಪುಸ್ತಕಗಳಿಂದ ಓದಿದ, ವಿಚಾರಗಳನ್ನು ನಮ್ಮ ಮನದೊಳಗೆ ಪೂರ್ವ ಗುರುಗಳಿಂದ ಈ ಹಿಂದೆ, ಇದೇ ಕುರಿತಾಗಿ ಪಡೆದಿದ್ದ ವಿಚಾರಗಳ ಮಧ್ಯೆ ಆದಿ ಗುರುಗಳಿಂದ ಉಪದೇಶಿಸಲ್ಪಟ್ಟಂತೆ ವಿಮರ್ಷಿಸಿ, ಇದಕ್ಕೊಂದು ತುಲನಾತ್ಮಕ ಮೌಲ್ಯವನ್ನು ನಿರ್ಧರಿಸಿ, ಇದನ್ನು ಮನದೊಳಗೆ, ನಿಧಿ ಧೀ ಆಸೀನ, 'ನಿಧಿಧ್ಯಾಸನ', ಗೊಳಿಸಿಕೊಳ್ಳುವೆವು.

ಕಾಲಾನುಕ್ರಮದಲ್ಲಿ, ಮೂಲ ಗುರುಗಳ ಕೃಪೆಯಿಂದ, ಈ ವಿಚಾರಗಳು ನಮ್ಮೊಳಗೆ ಸಾಕ್ಷಾತ್ಕಾರಗೊಂಡು, ಉಚಿತ ಸಂದರ್ಭಗಳಲ್ಲಿ, ನಾವು ಇವನ್ನು ಯಥಾ ಯುಕ್ತವಾಗಿ ಪ್ರಯೋಜಿಸ ಬಲ್ಲವರಾಗುವೆವು. ಇಲ್ಲಿನ ವಿಭಿನ್ನ

ಗುರುಗಳು ಆ ಮಹಾದೇವನ ಅಂಶರೆಂಬ ಅಭಿಪ್ರಾಯವು ಪ್ರಚಲಿತದಲ್ಲಿದೆ. ಈ ನಾಲ್ಕು ಸ್ತರಗಳಲ್ಲಿನ ವಿದ್ಯೆಯ ರೂಪಗಳು ಅನುಕ್ರಮವಾಗಿ, ವಿದ್ಯೆ ಜ್ಞಾನ ಬುದ್ಧಿ (ಪರಿಜ್ಞಾನ) ಹಾಗೂ ವಿದ್ವತ್ತು, ಎಂಬುದಾಗಿ ಗುರುತಿಸಲ್ಪಟ್ಟಿವೆ. ಹಾಗೂ, ಸಾಂಕೇತಿಕವಾಗಿ, ಇವು ಕೆಲವೊಮ್ಮೆ, ಹಾಲು ಮೊಸರು ಬೆಣ್ಣೆ ಮತ್ತು ಘೃತ ಯಾ, ಆಂಗ್ಲ ಭಾಷೆಯಲ್ಲಿ, ಡಾಟಾ ಇನ್ಫೊರ್ಮೇಷನ್ ನೋಲೆಡ್ಜ್ ಹಾಗೂ ವಿಸ್ಡಮ್ ಎಂಬುದಾಗಿಯೂ ಗುರುತಿಸಲ್ಪಡುತ್ತವೆ. ಉದಾಹರಣೆಗಾಗಿ, ಬೆಣ್ಣೆಯಂತಹ ಮಾತುಗಳಿಂದ ನಾವು ಸನ್ಮಿತ್ರರುಗಳನ್ನು ಪಡೆಯುತ್ತೇವೆ; ಯಜ್ಞಗಳಲ್ಲಿ ತುಪ್ಪಗಳನ್ನು ಅಗ್ನಿಗಳಿಗೆ ಅರ್ಪಿಸುತ್ತಾರೆ, ಇತ್ಯಾದಿ.

ಈ ರೀತಿಯಾಗಿ ಅರ್ಜಿಸಿದ ವಿದ್ಯೆಗಳನ್ನು ಪರಿಷ್ಕರಿಸಿ ಮನದೊಳಗೆ ಅಳವಡಿಸಿಕೊಂಡರೆ ಮಾತ್ರ ಒಬ್ಬನು ಇನ್ನಷ್ಟು ಮತ್ತಷ್ಟು ವಿಚಾರಗಳನ್ನು ಸಂಗ್ರಹಿಸಿಕೊಳ್ಳಬಲ್ಲನು, ಉಪಯೋಗಿಸಿಕೊಳ್ಳಬಲ್ಲನು. ಪಾರ್ವತಿಯ ಪುಟ್ಟ ಕುಮಾರನ ಪ್ರಾಕೃತಿಕ, ಕುತೂಹಲದೆಡೆ ತನ್ನ ತ್ರಿಶೂಲ ಮೂಲಕದ ಅನುಗ್ರಹದಿಂದ ತುಸು ನಿರ್ದೇಶನಾದಾಸರೆ, ವಿದ್ಯಾಭ್ಯಾಸ ವನ್ನು ಒದಗಿಸಿ, ಮಹಾದೇವನು ಅವನನ್ನು ಗಜಗಾತ್ರ ಮೊಗ, ಉದರಯುಕ್ತ ವಿದ್ಯೇಶನಾಗಿಸಿ, ತನ್ನ ಗಣಗಳಿಗೆಲ್ಲಾ ನಾಯಕನಾಗಿ ನೇಮಿಸಿದನು. ಆದರೆ, ಇಲ್ಲಿನ ಪರಿಷ್ಕರಣೆಯಲ್ಲಿ ಕಾರಣಾಂತರ ತುಸು ನ್ಯೂನತೆಗಳು ಒದಗಿದಲ್ಲಿ, ಈ ಕುಮಾರನೇ ವಿಘ್ನೇಶನಾಗಿ ಕಂಡುಬರಬಹುದೇನೋ ? ಅವನ ಒಲುಮೆಯ ನೆರಳನ್ನೇ ನಾವುಗಳೆಲ್ಲರೂ ಸದಾಕಾಲ ಆಶ್ರಯಿಸುತ್ತಿರುವುದು ಅವಶ್ಯವಿರುತ್ತದೆ.

**ಸಾರಾಂಶ** : ನಮ್ಮ ಜೀವನದೊಳಗಿನ ಎಲ್ಲಾ ಕರ್ಮ ನಿರ್ವಹಣೆಗಳಿಗೆ ಅವಶ್ಯವಿರುವ ಸಲಕರಣೆಗಳ ರೂಪು ರೇಖೆಗಳನ್ನು ನಾವುಗಳೆಲ್ಲರೂ ನಮ್ಮ ಜನ್ಮಕಾಲದಲ್ಲೇ ಪ್ರಾಕೃತಿಕವಾಗಿ ಹೊಂದಿರುತ್ತೇವೆ; ಶಿಸ್ತಿನ ವಿದ್ಯಾಭ್ಯಾಸ ವೃತ್ತಿ ತರಬೇತಿಗಳಿಂದ ನಾವುಗಳು ಉತ್ಕೃಷ್ಟ ಪರಿಣತಿಗಳನ್ನು ಗಳಿಸಿ ಬದುಕಿನಲ್ಲಿ ಸಾರ್ಥಕತೆಯ ತೃಪ್ತಿಯನ್ನು ಹೊಂದಬಲ್ಲವರಾಗುವೆವು.

## ಒಂದೆರಡು ವಿಶೇಷ ವಿಚಾರಗಳು : -

**1** . ಈ ವಿದ್ಯೇಶ ಗಣಪತಿಯು, ವಿಘ್ನಗಳ ವಿನಾಶಕ, ವಿಘ್ನೇಶನಾಗಿಯೂ ಮಹಾದೇವನಿಂದ ಹರಸಲ್ಪಟ್ಟಿರುವನು. ಇದು ಏನು, ಮತ್ತು ಹೇಗಿರಬಹುದು ? ನಮ್ಮ ಮೂಲ ಲೇಖನದಲ್ಲಿ ಈ ಗಣೇಶನು ವಿದ್ಯಾಧಿಪತಿ, ವಿಘ್ನೇಶನಾಗಿರುತ್ತಾನೆ. ಅವನ ಈ ವಿದ್ಯೆಯು ಮಾತೆ, ಪಾರ್ವತೀಯಿಂದ ಒದಗಿದ ಪ್ರಾಕೃತಿಕ ಕುತೂಹಲ Natural, ಮತ್ತು ಅವನ ಪಿತೃ ಮಹಾದೇವನು ತ್ರಿಶೂಲ ಮೂಲಕದ ಅನುಗ್ರಹ, Nurtural, ವಿದ್ಯಾಭ್ಯಾಸದ, ಶಿಕ್ಷಣದ, ಮೂಲಕ ಒದಗಿರುತ್ತದೆ. ಈ ಮಹಾದೇವನು, ಮನೋಭಿಮಾನೀ, ಮನೋ

ನಿಯಾಮಕ, ಆತ್ಮಜ್ಞಾನ ದಾಯಕ, ಮಹಾ ರುದ್ರನು, ಶ್ರೀ ಪೂರ್ವೇತ್ಯಾದಿ ನಾಲ್ಕು ಗುರುಗಳ ಸಾಂಕೇತಿಕ ರೂಪಿಗಳು ಅನ್ನಬಹುದು.

ನಮ್ಮ ವಿದ್ಯಾಭ್ಯಾಸಗಳಿಗಾಗಿ ನಾವು, ಹಲವಾರು ವಿಭಿನ್ನ ಗುರುಗಳನ್ನು ಆಶ್ರಯಿಸುತ್ತಿರ ಬೇಕಾಗುತ್ತದೆ. ಆ ಗುರುಗಳ ವಿದ್ಯಾಭ್ಯಾಸದ ಅಧ್ಯಯನ ಅಧ್ಯಾಪನಗಳೊಳಗಿನ ಪರಿಶ್ರಮಗಳನ್ನು ನಾವು ಪೂರ್ಣವಾಗಿ ಅರಿಯುತಿರಲಾರೆವು. ಯಾಕೆಂದರೆ, ಪ್ರಥಮತಃ ನಾವುಗಳು ನಮ್ಮ ಕುತೂಹಲದ ಸ್ತರ, ಅಧ್ಯಯನದ ಉದ್ದೇಶಗಳೊಳಗಿನ ನಂಬಿಕೆಗಳ ಕೊರತೆಗಳು, ಮತ್ತು, ತತ್ಪಶ್ಚಾತ್, ನಮಗೆ ಒದಗಿದ ಗುರುಗಳ ವಿದ್ಯಾ ಅರ್ಜನ ಸ್ವಧ್ಯಾಯ ದೊಳಗಿರಬಹುದಾದ ಕೊರತೆ, ಇತ್ಯಾದಿ ವಿಘ್ನಗಳಿಂದ ನಮ್ಮ ವಿದ್ಯಾರ್ಜನೆಗಳು ಅಸಮರ್ಪಕವಿರಬಲ್ಲವು. ಆದರೆ ನಾವುಗಳು, ಈ ವಿದ್ಯಾರ್ಜನೆಗಳೊಳಗೆ, ಭಕ್ತಿ ಪೂರ್ವಕ ಮುಂದುವರಿಯುತ್ತಾ, ಇಲ್ಲಿನ ಮೂಲಗುರು, ಮೂಲದೇವತೆಗಳ ಅನುಗ್ರಹಗಳು ಒದಗಿಬಂದಲ್ಲಿ, ನಾವುಗಳು ನಮ್ಮ ಸಹ ಉಪಾಧ್ಯಾಯರುಗಳು, ಸಹ ಮಿತ್ರರುಗಳೊಳಡನೆ ಪ್ರಸ್ತುತದ ತಾತ್ವಿಕ ವಿಚಾರಗಳನ್ನು ವಿಮರ್ಷಿಸಿಕೊಂಡು, ಈ ವಿಘ್ನೇಶ ಪ್ರಸಾದಿತ ಕರುಣೆಗಳಿಂದ ನಮ್ಮ ವಿಧ್ಯಾಭ್ಯಾಸಗಳಲ್ಲಿ ಸುಸೂತ್ರವಾಗಿ ಮುಂದುವರಿಸಿ ಕೊಳ್ಳುತ್ತಿರಬಲ್ಲೆವು. ಮತ್ತು, ತತ್ಕಾರಣವಾಗಿ, ಪ್ರಕೃತೀಪುರುಷ ಪಾರ್ವತೀ ಪರಮೇಶ್ವರರು ವಿದ್ಯೇಶ ಗಣಪತಿಯನ್ನು ವಿಘ್ನೇಶನಾಗಿರಲೂ, ಹರಸಿದರು.

ಈ ಸ್ತ್ರರಗಳನ್ನು ನಾವುಗಳು ಆ ವಿದ್ಯೇಶ ಗಣಪತಿಯನ್ನು ಆರಾಧಿಸಿ ಮಾತ್ರ ಹೊಂದಬಲ್ಲೆವು. ಹಾಗಾಗಿ, ಅವನ್ನು ನಾವುಗಳು ಶ್ರೀ ಮನೋಭಿಮಾನೀ, ಆತ್ಮ ಜ್ಞಾನ ಗುರು, ಮಹಾದೇವ ಪಾರ್ವತೀಯರುಗಳಿಂದ ಮಾತ್ರ ಅರಿಯಬಲ್ಲೆವು. ತತ್ಕಾರಣಗಳಿಂದಾಗಿ ಈ ವಿದ್ಯೇಶ ಗಣಪತಿಯು ವಿಘ್ನೇಶನಾಗಿಯೂ, ಆ ಮಾತೆ ಪಾರ್ವತೀ ಪರಮೇಶ್ವರುಗಳಿಂದ ನಿಯಮಿತನಿರುತ್ತಾನೆ. ಹಾಗಾಗಿ, ಶ್ರೀ ಗಣೇಶನು ಇವರುಗಳ, ಅಪಾರ ವಿದ್ಯೆ ವಿದ್ವತ್ತುಗಳ, ಮೂಲ ರೂಪ**, ಸಾರಾಂಶ**, ಎನ್ನಬಹುದೋ ಏನೋ ?

**2 . ಶ್ರುತಿ ಫಲ : -** ಇಲ್ಲಿ ಮೇಲ್ಗಡೆಯ ಶ್ರೀ ಪೂರ್ವೇತ್ಯಾದಿ ಗುರುಗಳನ್ನು ನಾವುಗಳೆಲ್ಲರೂ ಅರಿತು, ಮುಂದುವರಿಯುತಿದ್ದರೆ, ಈ ಚಿರಂತರ ನೂತನ ತತ್ವಗಳು ನಮ್ಮೊಳಗೆ ರೂಪುಗೊಳ್ಳುತಿರಬಲ್ಲವು. ಈ ನಿರಂತರ ವಿಚಾರದ ಅರಿವು ನಮಗೇ ಅಭಿಮಾನದ, ಸ್ವಂತಿಕೇಯ ಭಾವವನ್ನೀಯಬಲ್ಲವು. ಆದಾಗ, ನಾವುಗಳೆಲ್ಲರೂ ಅಭಿಮಾನವಂತರಾಗಿ ಸದಾಕಾಲ ಜೀವಿಸುತ್ತಿರಬಲ್ಲೆವು.

# || ಓಂ ರುದ್ರಂ ವಂದೇ ಜಗದ್ಗುರುಂ ಓಂ||